## ಹೊರಾಂಗಣದಲ್ಲಿ ಜೀವ ಜಗತ್ತು

# ಜೇಡರ ಬಲೆಗಳನ್ನು ಗಮನಿಸಿ ನೋಡಿರಿ

**ನಿಮ್ಮ ತರಗತಿಯಲ್ಲಿ, ಮನೆ ಅಥವಾ ಹೊರಗಡೆ ಒಂದು ಜೇಡರ ಬಲೆಯನ್ನು ಹುಡುಕಿರಿ – ಅದನ್ನು ಕೆಲವು ನಿಮಿಷ ಗಮನಿಸಿರಿ.**

### ಚಿತ್ರಬರೆದು ನಿಮ್ಮ ಬಲೆಯನ್ನು ವಿವರಿಸಿರಿ.

1. ಅದು ಸರಳವಾಗಿದೆಯೆ ಅಥವಾ ಜಟಿಲವಾಗಿದೆಯೆ? ಅದನ್ನು ಲಂಬವಾಗಿ ಕಟ್ಟಿದೆಯೇ ಅಥವಾ ಸಮತಲವಾಗಿ ಕಟ್ಟಿದೆಯೇ? ಸಮರೂಪತೆಯಿಂದಿದೆಯೇ ಅಥವಾ ಗೋಜಲಾಗಿದೆಯೇ, ಲಾಳಿಕೆ ಅಥವಾ ಗುಡಾರದಂತಿದೆಯೇ? ಬಲೆ ಸರಿಯಾಗಿ ಕಾಣಿಸದಿದ್ದರೆ ಅದರ ಮೇಲೆ ಸ್ವಲ್ಪ ನೀರನ್ನು ತುಂತುರಾಗಿ, ನಿಧಾನವಾಗಿ ಸ್ಪ್ರೇಯಿಂದ ಹಾಕಿರಿ.
2. ನೀವು ಬಲೆಯನ್ನು ಎಲ್ಲಿ ನೋಡಿದಿರಿ (ನೆಲದ ಮೇಲೆ, ಗಿಡದ ಮೇಲೆ, ಮನೆಯೊಳಗೆ)? ನೀವು ಜೇಡವನ್ನು ನೋಡಿದ ಸ್ಥಳಕ್ಕೂ ಬಲೆಯಿರುವ ವಿನ್ಯಾಸಕ್ಕೂ ಏನಾದರೂ ಸಂಬಂಧ ಇದೆಯೆ? ಉದಾಹರಣೆಗೆ, ಲಾಳಿಕೆ ರೀತಿಯ ಬಲೆಗಳು ಯಾವಾಗಲೂ ಹುಲ್ಲು ಮತ್ತು ಪೊದೆಗಳ ನಡುವೆ ಕಟ್ಟಲ್ಪಟ್ಟಿರುತ್ತವೆ ಎಂದು ಗಮನಿಸಿದ್ದೀರಾ? ಅಥವಾ ಆರ್ಬ್ (ಚಕ್ರ) ಬಲೆಗಳು ಗಿಡದ ಮೇಲ್ಭಾಗದಲ್ಲಿ ಎರಡು ರೆಂಬೆಗಳ ಮಧ್ಯೆ ಜಾಗ ಇರುವಲ್ಲಿ ಕಟ್ಟಲ್ಪಟ್ಟಿರುತ್ತವೆ ಎಂದು ಗಮನಿಸಿದ್ದೀರಾ?
3. ಬಲೆಯಲ್ಲಿ ಜೇಡವನ್ನು ಕಾಣಬಲ್ಲಿರಾ? ಹೌದು ಎಂದಾದರೆ, ಅದು ಎಲ್ಲಿದೆ ಮತ್ತು ಏನು ಮಾಡುತ್ತಿದೆ?
4. ಅದು ಸರಳವಾದ ಬಲೆಯಾಗಿದ್ದರೆ, ಮುಂಜಾನೆ ಅಥವಾ ಮುಸ್ಸಂಜೆಯ ವೇಳೆ ಜೇಡ ಬಲೆಯನ್ನು ಕಟ್ಟಲು ಶುರು ಮಾಡಿದಾಗ ಗಮನಿಸಲು ಪ್ರಯತ್ನಿಸಿ. ಪೂರ್ತಿ ಬಲೆಯನ್ನು ನೇಯಲು ಅದಕ್ಕೆ ಎಷ್ಟು ಸಮಯ ಹಿಡಿಯಿತು? ನೀವು ಅದು ಕಟ್ಟುವಾಗ ಅನುಸರಿಸಿದ ವಿಧಾನವನ್ನು ವಿವರಿಸಬಲ್ಲಿರಾ? ನಿಮ್ಮ ಸ್ನೇಹಿತರೊಡನೆ ವಿಚಾರಿಸಿ ಎಲ್ಲಾ ಬಲೆಕಟ್ಟುವ ಜೇಡಗಳೂ ಒಂದೇ ರೀತಿಯ ವಿಧಾನ ಮತ್ತು ಕಾಲ ತೆಗೆದುಕೊಳ್ಳುತ್ತವೆಯೆ ಪರೀಕ್ಷಿಸಿ.
5. ಬಲೆಯ ಮೇಲೆ ಇನ್ನೂ ಏನಾದರೂ ವಸ್ತುಗಳು ಇವೆಯೆ? ಬೇರೆ ಜೇಡಗಳು, ಕೀಟಗಳು ಅಥವಾ ಕಸ, ಕಡ್ಡಿಗಳು, ಎಲೆಗಳು ಇವೆಯೆ?



**ನಿಮಗೆ ಬೇಕಾಗುವುದು:**



ಸ್ಪ್ರೆ ಮಾಡಲು ಮೂತಿ ಇರುವ ಬಾಟಲ್



ಪೆನ್ಸಿಲ್



ಕಾಗದ



**ಕೊಡುಗೆ:**

**ವೀಣಾ ಕಪೂರ್** ಬೆಂಗಳೂರಿನ ನೇಚರ್ ಕನ್ಸರ್ವೇಶನ್ ಫೌಂಡೇಷನ್‌ನಲ್ಲಿ ವೃತ್ತಿಯನ್ನು ಹೊಂದಿದ್ದಾರೆ. ಅವರನ್ನು vena@ncf-india.org ನಲ್ಲಿ ಸಂಪರ್ಕಿಸಬಹುದು.

**ದಿವ್ಯ ಉಮ** ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಲಿಬರಲ್ ಸ್ಟಡೀಸ್‌ನಲ್ಲಿ ವೃತ್ತಿಯನ್ನು ಹೊಂದಿದ್ದಾರೆ. ಅವರನ್ನು divya.uma@apu.edu.in ನಲ್ಲಿ ಸಂಪರ್ಕಿಸಬಹುದು.

ಐ ವಂಡರ್...
ಶಾಲಾ ವಿಜ್ಞಾನದ ಮರುಶೋಧನೆ

Azim Premji University